ಶ್ರೀವತ್ಸಚಿಹ್ನಮಿಶ್ರ ವಿರಚಿತ

# ಅತಿಮಾನುಷಸ್ತವ

(ಕನ್ನಡ ಪದ್ಯಾನುವಾದ)





ರಚನೆ: ಜಗ್ಗು ಶಿಂಗರಯ್ಯಂಗಾರ್

ರೂ. ೧-೦೦

ಈ ಲೇಖಕರಿಂದ ವಿರಚಿತವಾದ ಇತರ ಕೃತಿಗಳು :

ಸಂಸ್ಕೃತ ಕೃತಿಗಳು (ಮುದ್ರಿತ)

ಯದುಶೈಲ ಚಂಪೂಃ
ದಾಶರಥಿಚರಿತಂ
ಕಾವ್ಯಕಲಾಪಃ
ವೆಂಕಟೇಶಪದಾವಲಂಬ ಸ್ತೋತ್ರಂ

ಅಮುದ್ರಿತ

ಶ್ರೀಕೃಷ್ಣವರಾಂಗ ಸ್ತುತಿಃ
ಶೌರಿಶೌರ್ಯಂ (ನಾಟಕ)

ಕನ್ನಡ ಕೃತಿಗಳು (ಮುದ್ರಿತ)

ನೀತಿಸಾರಾವಳಿ
ಸುಭಾಷಿತಗಳು
ಚಲ್ವನಾರಾಯಣಶತಕ
ಸಾರ್ವಜ್ಞ ಪದಗಳು
ಅರ್ಚೆಯ ಅಚ್ಯುತ
ಬರಲಿನ ಭಾಗ್ಯ

ಶ್ರೀವತ್ಸಚಿಹ್ನಮಿಶ್ರ ವಿರಚಿತ

# ಅತಿಮಾನುಷಸ್ತವ

(ಕನ್ನಡ ಪದ್ಯಾನುವಾದ)



ಸಂಸ್ಕೃತ ಪಂಡಿತ್ : ಜಗ್ಗು ಶಿಂಗರಯ್ಯಂಗಾರ್

ಸೋಮೇಶ್ವರ ಬಡಾವಣೆ

ತುಮಕೂರು

ATIMANUSASTAVAM Originally composed in sankrit by Shreevatsachinhamishra Translated into kannada by Jaggu. Shingaraiyengar, Someswara extension, Tumkur.

Crown 1/8 1000 copies 36 Pages 1975



ಬೆಲೆ 1–00

ಮುದ್ರಕರು:

ಆಳ್ವಾರ್ ಪ್ರಿಂಟರ್ಸ್

ಈಜುವ ಕೊಳದ ಬಡಾವಣೆ

ಬೆಂಗಳೂರು–560003

18/2/75

## ವಿಜ್ಞಾಪನೆ

ಶ್ರೀವತ್ಸಚಿಹ್ನರು ಅಥವಾ ಕೂರೇಶರು (ಕೂರತ್ತಾಳ್ವಾರ್) ಎಂಬ ನಾಮಧೇಯವುಳ್ಳ ಮಹಾಶಯರು ಶ್ರೀ ರಾಮಾನುಜಾಚಾರ್ಯರ ಸಮಕಾಲಿಕರು. ಸುಪ್ರಸಿದ್ಧಸೂರಿಶ್ರೇಷ್ಠರಾದ ಇವರು ಶ್ರೀ ರಾಮಾನುಜಾಚಾರ್ಯರಿಗಿಂತ ವಯಸ್ಸಿನಲ್ಲಿ ಹಿರಿಯರಾಗಿದ್ದರೂ ಅವರ ಪರಮಾಪ್ತ ಶಿಷ್ಯರಾಗಿದ್ದರು. ಬ್ರಹ್ಮಸೂತ್ರಕ್ಕೆ ವಿಶಿಷ್ಟಾದ್ವೈತಸಿದ್ಧಾಂತಪರವಾಗಿ ಶ್ರೀಭಾಷ್ಯವನ್ನು ರಚಿಸಲು ತೊಡಗಿದ ತಮ್ಮ ಗುರುವರ್ಯರಿಗೆ ಶಾಸ್ತ್ರನಿರ್ಣಯ ಸಂದರ್ಭಗಳಲ್ಲಿ ಇವರು ಬಹಳ ಸಹಾಯಕರಾಗಿದ್ದರು. ವೈದುಷ್ಯದಲ್ಲಿಯೂ ಭಗವದ್ಭಕ್ತಿಯಲ್ಲಿಯೂ ಇವರು ಹೇಗೆ ಸುಪ್ರಸಿದ್ಧರಾಗಿದ್ದರೋ ಹಾಗೆಯೇ ಉತ್ತಮ ಕವಿತಾ ರಚನೆಯಲ್ಲಿಯೂ ಅದ್ವಿತೀಯರಾಗಿದ್ದರು. ಇವರು ರಚಿಸಿರುವ ಅನೇಕ ಗ್ರಂಥಗಳಲ್ಲಿ ಪಂಚಸ್ತವಗಳೆಂಬ ಸ್ತೋತ್ರಗಳು ಬಹಳ ಮುಖ್ಯವಾದವುಗಳು. ಶ್ರೀಸ್ತವ, ಸುಂದರಬಾಹುಸ್ತವ, ವೈಕುಂಠಸ್ತವ, ಅತಿಮಾನುಷಸ್ತವ, ವರದರಾಜಸ್ತವ ಎಂಬ ಇವುಗಳೇ ಆ ಪಂಚಸ್ತವಗಳು. ಇವುಗಳಲ್ಲಿ ಅತಿಮಾನುಷಸ್ತವವು ಬಹಳ ವಿಚಿತ್ರವಾದ ಸರಸಮಧುರಸ್ತೋತ್ರವು. ಇದರಲ್ಲಿ ಭಗವಂತನ ವಿಭವಾವತಾರಗಳನ್ನು ಅಂದರೆ ನರಸಿಂಹ, ವಾಮನ, ಶ್ರೀರಾಮ, ಶ್ರೀಕೃಷ್ಣ ಇವರೇ ಮೊದಲಾದವರನ್ನು ಸ್ತೋತ್ರಮಾಡಿರುತ್ತಾರೆ. ಈ ವಿಭವಾವತಾರಗಳಲ್ಲಿ ಭಗವಂತನು ನಡೆಸಿದ ಅನೇಕ ಕಾರ್ಯಗಳು ಪರಸ್ಪರ ವಿರುದ್ಧವಾಗಿವೆಯೆಂಬುವುದನ್ನು ವಿಷದಪಡಿಸುತ್ತಾ ವರ್ಣಿಸುವುದರ ಮೂಲಕ ಆ ಪರಮಾತ್ಮನ ಪರತ್ವ ಸರ್ವಜ್ಞತ್ವ ಸರ್ವಶಕ್ತತ್ವವೇ ಮೊದಲಾದ ವಿಚಿತ್ರವಾದ ಕಲ್ಯಾಣ ಗುಣಗಳನ್ನು ಹೊಗಳಿ ಸ್ತುತಿಸಿರುತ್ತಾರೆ. ಇಂತಹ ಈ ಸ್ತೋತ್ರದ ಸೊಬಗನ್ನು ಅನುಭವಕ್ಕೆ ತಂದುಕೊಂಡು ಇದರ ಮಾಧುರ್ಯವನ್ನು ಕರ್ಣಾಟಕ ಭಾಷೆಯಲ್ಲಿ ಪದ್ಯರೂಪದಲ್ಲಿ ರಚಿಸಿ ರಸಿಕರಾದ ಕನ್ನಡಿಗರಿಗೆ ಉಣಿಸಬೇಕೆಂದು ಸಂಕಲ್ಪಿಸಿದೆನು. ಸಾಧ್ಯವಾದಮಟ್ಟಿಗೂ ಮೂಲಭೂತವಾದ ಸಂಸ್ಕೃತ ಶ್ಲೋಕಗಳಿಗನುಗುಣವಾಗಿ ಅವುಗಳ ಭಾವಾರ್ಥಗಳನ್ನು ಬಿಡದೆ ಭಾಮಿನೀಷಟ್ಪದಿಯಲ್ಲಿ ರಚಿಸಿರುತ್ತೇನೆ. ಕೂರೇಶರ ಈ ಅತಿಮಾನುಷಸ್ತವದಲ್ಲಿ ಒಟ್ಟು ಅರವತ್ತು ಶ್ಲೋಕಗಳಿವೆ. ಆದರೆ ಕೆಲವು ಶ್ಲೋಕಗಳು ಒಂದೇ ಭಾವಾರ್ಥವನ್ನು ಕೊಡುವ

ಬೇರೆ ಬೇರೆ ಶ್ಲೋಕಗಳಾಗಿರುವುದರಿಂದ ಅಂತಹ ಎರಡು ಮೂರು ಏಕಾರ್ಥ ಬೋಧಕ ಶ್ಲೋಕಗಳಿಗೆ ಬದಲಾಗಿ ನಾನು ಒಂದೇ ಪದ್ಯದಲ್ಲಿ ಭಾವವನ್ನು ಹೇಳಿಮುಗಿಸಿರುತ್ತೇನೆ. ಆದುದರಿಂದ ಈ ಕನ್ನಡ ಅತಿಮಾನುಷ ಸ್ತೋತ್ರವು ಐವತ್ತು ಪದ್ಯಗಳಲ್ಲಿ ಅಡಕವಾಗಿದೆ. ಕೂರನಾಥರ ಸಂಸ್ಕೃತಶ್ಲೋಕಗಳನ್ನು ಕ್ರಮವಾಗಿ ಒಂದೊಂದನ್ನಾಗಿ ಬರೆದು ಅದರದರ ಕೆಳಗೆ ಅದೇ ಭಾವಾರ್ಥದ ಕನ್ನಡ ಪದ್ಯಗಳನ್ನು ಬರೆದು ಮುದ್ರಿಸಲಾಗಿದೆ.

ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಆದರಾಶಿಯವುಳ್ಳ ಮಹನೀಯರೂ ಕನ್ನಡಕಾವ್ಯಗಳಿಗೆ ಪ್ರೋತ್ಸಾಹ ಕೊಡಲು ಬದ್ಧಕಂಕಣರಾದ ಸಹೃದಯಮಹಾಶಯರೂ ಸಹ ನನ್ನ ಈ ಪದ್ಯಕಾವ್ಯವನ್ನು ವಿಮರ್ಶಾತ್ಮಕ ದೃಷ್ಟಿಯಿಂದ ಪರಿಶೀಲಿಸಿ ಗುಣದೋಷಗಳನ್ನು ಯಥಾವತ್ತಾಗಿ ನಿಸ್ಸಂಕೋಚವಾಗಿ ವ್ಯಕ್ತಪಡಿಸಬೇಕೆಂದು ಪ್ರಾರ್ಥಿಸುತ್ತೇನೆ. ಇದು ಗುಣಭೂಯಿಷ್ಠವಾಗಿದ್ದ ಪಕ್ಷದಲ್ಲಿ ಅಸೂಯೆಗೆ ಅವಕಾಶಕೊಡದಂತೆ ಈ ಗ್ರಂಥವು ಸರ್ವತ್ರ ಪ್ರಚಾರವಾಗುವಂತೆ ಉದಾರ ಮನಸ್ಸಿನಿಂದ ಪ್ರೋತ್ಸಾಹಿಸಿ ನನ್ನ ಶ್ರಮವನ್ನು ಸಾರ್ಥಕಪಡಿಸಬೇಕಾಗಿ ವಿನಯಪೂರ್ವಕವಾಗಿ ಪ್ರಾರ್ಥಿಸುತ್ತೇನೆ.

ಇತಿ ಗ್ರಂಥಕರ್ತ

ಸಜ್ಜನವಿಧೇಯ

ಜಗ್ಗೂ ಶಿಂಗರಯ್ಯಂಗಾರ್

ಶ್ರೀಃ

ಶ್ರೀವತ್ಸಚಿಹ್ನಮಿಶ್ರೇಭ್ಯೋ ನಮಉಕ್ತಿಮಧೀಮಹಿ
ದುಕ್ತಯಸ್ತ್ರಯೀಕಂಠೇ ಯಾಂತಿ ಮಂಗಳಸೂತ್ರತಾಂ

ಶ್ರೀಮತೇ ರಾಮಾನುಜಾಯ ನಮಃ
ಶ್ರೀಮತೇ ಶ್ರೀವತ್ಸಚಿಹ್ನಮಿಶ್ರಾಯ ನಮಃ

ಶ್ರೀವತ್ಸಚಿಹ್ನಮಿಶ್ರರಿಂದ ವಿರಚಿತವಾದ ಸಂಸ್ಕೃತ ಭಾಷೆಯ ಅತಿಮಾನುಷಸ್ತವದ ಕರ್ಣಾಟಕಭಾಷಾನುವಾದರೂಪವಾದ ಪದ್ಯಗಳು.

ಅತಿಮಾನುಷಶೀಲವೃತ್ತವೇಷೈ
ರತಿವೃತ್ತಾಮರವಿಕ್ರಮಪ್ರತಾಪೈಃ ।
ಅತಿಲಂಘಿತಸರ್ವಲೋಕಸಾಮ್ಯಂ
ವರಯೇ ವೈಷ್ಣವವೈಭವಾವತಾರಂ ॥ ॥ ೧ ॥

ನಡವಳಿಕೆ ಗುಣವೇಷಶಕ್ತಿಗ
ಳೆಡಬಿಡದೆ ನರಸುತರ ಹಿರಿಮೆಯ
ತಡೆದು ಭುವನಗಳಲ್ಲಿ ಸಾಟಿಯಮೀರಿ ಮೆರೆಯುತಿಹ ।
ಕಡಲಶಯನನ ಪರಮಪುರುಷನ
ಪೊಡವಿಯೊಳು ವಿಭವಾವತಾರವ
ಪಡೆದವನ ಶುಭವಿಭವದವತಾರವನು ವರಿಸುವೆನು ॥

ಶ್ರೇಯಃ ಕಿರಂತು ಕಿರಣಾಶ್ಚರಣಾರವಿಂದ
ನಿಷ್ಯಂದಮಾನಮಕರಂದರಸೌಘದೇಶ್ಯಾಃ ।
ತಜ್ಜಾಶ್ರ್ಯತೀವ್ರವಿಧಿನಾ ಉತ್ಸನ್ನತಿ ಪ್ರತೀತಾಃ
ಮಾಂಗಲ್ಯರಂಗನಿಲಯಸ್ಯ ಪರಸ್ಯ ಧಾಮ್ನಃ ॥ ॥ ೧ ॥

ರಂಗನಾಥನ ಚರಣಕಮಲಗ
ಳಂಗುಟಿದ ಕಿರಣಗಳರಾಜಿಯು
ಕಂಗಳಿಗೆ ಮನಗಳಿಗೆ ಮಧುಮಯರಸವನುಣಿಸುತಲಿ ।
ತುಂಗವೇದದ ಮಧುನ ಉತ್ಸಕೆ
ಭಂಗುರತೆ ತೋರುತ್ತ ಬೆಳಗುತ
ಮಂಗಳವ ಕರುಣಿಸಲಿ ಸತತವು ನಮಗೆ ನೆರವಾಗಿ ॥

ಶ್ರೀಮತ್ಪರಾಂಕುಶಮುನೀಂದ್ರಮನೋನಿವಾಸಾ
ತ್ತಜ್ಜಾನುರಾಗರಸಮಜ್ಜನಮಂಜಸಾಪ್ಯ ।
ಅದ್ಯಾಪ್ಯನಾರತತದುತ್ಥಿತರಾಗಯೋಗಂ
ಶ್ರೀರಂಗರಾಜಚರಣಾಂಬುಜಮುನ್ನಯಾಮಃ ॥ ॥ ೨ ॥

ಶ್ರೀಪರಾಂಕುಶಮುನಿಕುಲೇಶ್ವರ
ರಾಪರಿಯ ಪಾವನಹೃದಬ್ಜದಿ
ನೂಪುರಾಂಚಿತಪದವು ನಿನ್ನದು ವಸಿಸಲನವರತ ।
ವ್ಯಾಪಿಸಿರೆ ಹೃದಯಾನುರಾಗದ
ಲೇಪನವು ಕೆಂಪೇರಿ ಬೆಳಗುವ
ಶ್ರೀಪತಿಯೆ ರಂಗೇಶ ನಿನ್ನಾ ಚರಣಕೆರಗುವೆನು ॥

ವಜ್ರಧ್ವಜಾಂಕುಶಸುಧಾಕಲಶಾತಪತ್ರ
ಪಂಕೇರುಹಾಂಕಪರಿಕರ್ಮಪರೀತಮಂತಃ ।
ಆಪಾದಪಂಕಜವಿಶೃಂಖಲದೀಪ್ರಮೌಳೇಃ
ಶ್ರೀರಂಗಿಣಶ್ಚರಣಯೋರ್ಯುಗಮಾಶ್ರಯಾಮಃ ॥ ॥ ೪ ॥

**ಕಮಲವಜ್ರಧ್ವಜಸುಧಾಘಟ**
**ವಿಮಲಶಂಖರಥಾಂಗರೇಖೆಗ**
**ಳಮಿತಕಾಂತಿಯು ಬೆಳಗುತಿರಲಾ ಪಾದಪದ್ಮದಲಿ ।**
**ಅಮರನುತಪದ ಮೊದಲುಗೊಂಡಾ**
**ಸುಮವಿರಾಜಿತ ಮಕುಟದಗ್ರದ**
**ವಿಮಲರಂಗನ ಪಾದಪದುಮಗಳಾಶ್ರಯೆಗಳಿಮಗೆ ॥**

ಜ್ಞಾನಂ ಬಲಂ ವಿಮಲಮೀಶನವೀರ್ಯಶಕ್ತಿ
ತೇಜಾಂಸಿ ಚ ತ್ರಿಯುಗಭೂಯಮುಪಾಗತಾನಿ ।
ಪೂರ್ಣಾನಿ ಷಟ್ಚ ಪರಿಗೃಹ್ಯ ಭವಂಶ್ಚತುರ್ಧಾ
ಭಕ್ತಂ ಜನಂ ತ್ವಮನುಜಗ್ರಹಿಥಾನುರಾಗಾತ್ ॥ ॥ ೫ ॥

**ಸುಗುಣಗಳ ನಿಧಿ ನೀನು ಸುಗುಣಗ**
**ಳಗಣಿತಗಳಿರುತಿರಲು ಶ್ರುತಿಗಳು**
**ಪೊಗಳುವುವು ಷಡ್ಗುಣನು ತ್ರಿಯುಗನು ನೀನು ಯೆಂದೆನುತ ।**
**ಮಿಗೆ ಬೆಳಗುತಿಹ ಜ್ಞಾನಬಲ ಮೇಣ್**
**ಸೊಗಸುತಿರುವೈಶ್ವರ್ಯ ವೀರ್ಯವು**
**ಬಗೆಗೆ ನಿಲುಕದ ಶಕ್ತಿತೇಜಗಳೆಮ್ಮ ರಕ್ಷಕವೈ ॥**

ಶಬ್ದಾದಿ ಹೇಯ ಇಹ ಗೋಚರ ಇಂದ್ರಿಯಾಣಾಂ
ತತ್ರತ್ಯನೀಕವಿಭವಸ್ತ್ವಮತೀಂದ್ರಿಯೋಽಸಿ ।
ತೇನೈವ ತೇನ ಬತ ದರ್ಶನಮಸ್ತಿ ಕಿಂಚಿತ್
ವಾಚೋ ಧಿಯಶ್ಚ ತತ ಏವ ನಗೋಚರೋಽಸಿ ॥ ॥ ೬ ॥

ಹೇಯತರ ಶಬ್ದಾದಿವಿಷಯಂಗ
ಳಾಯತನ ಪಂಚೇಂದ್ರಿಯಂಗಳು
ಕಾಯದಲ್ಲಿರಲಪಕೆ ನಿಯತವಿರುದ್ಧಗುಣವುಳ್ಳ ।
ತೋಯಜಾಕ್ಷನೆ ನಿನ್ನರೂಪದ
ಛಾಯೆಯರಿಯಲದೆಂತು ಸಾಧ್ಯವು
ನ್ಯಾಯವದರಿಂ ನೀನತೀಂದ್ರಿಯನೆಂಬ ಶ್ರುತಿವಚನ ॥

ಏವಂಸ್ಥಿತೇ ತ್ವದುಪಸಂಶ್ರಯಣಾಭ್ಯುಪಾಯೋ
ಮಾನೇನ ಕೇನಚಿದಲಪ್ಸ್ಯತ ನೋಪಲಬ್ಧಂ ।
ನೋಚೇದಮರ್ತ್ಯಮನುಜಾದಿಷು ಯೋನಿಷು ತ್ವಂ
ಇಚ್ಛಾವಿಹಾರವಿಧಿನಾ ಸಮವಾತರಿಷ್ಯಃ ॥ ॥ ೭ ॥

ಇಂತಿರುವನಿನ್ನನ್ನು ನೋಡಲ
ದೆಂತು ಸಾಧ್ಯವು ನರರಕಣ್ಣಿಗೆ
ಕಾಂತವೇಷವ ಧರಿಸದಿರ್ದೊಡೆ ವಿಭವರೂಪದಲಿ ।
ಅಂತಿರುವ ವರರಾಮಕೃಷ್ಣರ
ಧ್ವಾಂತಹರ ವಿಭವಾವತಾರವ
ಚಿಂತಿಸುವೆ ಸಂತಸದಿ ನಿಶ್ಚಲಮನದೊಳನವರತ ॥

ಶೀಲಃ ಕ ಏಷ ತವ ಹಂತ ದಯೈಕಸಿಂಧೋ
ಕ್ಷುದ್ರೇ ಪೃಥಗ್ಜನಪದೇ ಜಗದಂಡಮಧ್ಯೇ ।
ಕ್ಷೋದೀಯಸೋಽಪಿ ಹಿ ಜನಸ್ಯ ಕೃತೇ ಕೃತೀ ತ್ವ
ಮತ್ರಾವತೀರ್ಯ ನನು ಲೋಚನಗೋಚರೋಽಭೂಃ ॥ ॥ ೮ ॥

**ಯೇನು ಶೀಲವಿದೇನು ಗುಣವಿದು**
**ಮಾನಿಜನನುತ ಪರಮಕರುಣಿಯೆ**
**ನೀನು ಪೃಥುಜಗದಂಡಮಧ್ಯದ ಕ್ಷುದ್ರಜನಪದದಿ ।**
**ಏನನರಿಯದ ಮೂಢಜನರನು**
**ಸ್ವಾನುಭವದಿಂ ತಣಿಸೆ ಸುಕೃತಿಯೆ**
**ಮಾನಿಸುತಲವತರಿಸಿಲೋಚನಗಳಿಗೆ ಕಾಣಿಸುವೆ ॥**

ಯಂ ಪಾತಕಾತ್ಸುಮಹತೋಽಪ್ಯುದಧಾರಯಸ್ತ್ವಂ
ತ್ವತ್ಪಾದಪಾಂಸುಪರಿಪೂತಶಿರಾಶ್ಚ ಯೋಽಭೂತ್ ।
ತಂ ನಂದಸೇ ಕಿಲ ತತಶ್ಚ ವರಂ ವೃಣೀಷೇ
ಕ್ರೀಡಾವಿಧಿರ್ಬತವಿಲಕ್ಷಣಲಕ್ಷಣಸ್ತೇ ॥ ॥ ೯ ॥

**ಯಾವನಘವನು ನೀನೆ ಕಳೆದೆಯೊ**
**ಯಾವನು ತವ ಪದಾಂಬುಪೂತನೊ**
**ಆವಿಧದೊಳಡಿಯೊಳು ನಿನಗೆಂದೆನಿಸಿಕೊಂಡಿರುವ ।**
**ಅನ್ಯಪಕ್ಷಜನನ್ನು ಮೆಚ್ಚಿಸೆ**
**ಸೇವಿಸುತ ವರಗಳನು ಬೇಡುತ**
**ಭಾವಿಸುವ ಈಪರಿಯ ಲೀಲೆಯು ಬಹುವಿಲಕ್ಷಣವು ॥**

ಕ್ರೀಡಾವಿಧೇಃ ಪರಿಕರಸ್ತವ ಯಾತು ಮಾಯಾ
ಸಾ ಮೋಹಿನೀ ನ ಕತಮಸ್ಯ ತು ಹಂತ ಜಂತೋಃ ।
ಹೈಮರ್ತ್ಯಸಿಂಹವಪುಷಸ್ತವ ತೇಜಸೋಂಽಶೇ
ಶಂಭುರ್ಭರ್ವ ಹಿ ಶರಭಶ್ಶಲಭೋ ಬಭೂವ ॥ ॥ ೧೦ ॥

**ವಿಹಗವಾಹನ ನಿನ್ನ ಮಾಯೆಯು**
**ಬಹುವಿಚಿತ್ರತರಾತ್ಮಬಲದಿಂ**
**ಸಹಜಪರಿಕರವಾಗಿ ನಿನಗಿರೆ ವಿವಿಧಲೀಲೆಯೊಳು ।**
**ಅಹಹ ಲೋಕವ ಮೋಹಗೊಳಿಸುತ**
**ಲಿಹುದು ನೃಹರಿಯು ನಿನ್ನಕೋಪದ**
**ದಹನಹರಶರಭವನು ಸುಟ್ಟಿತು ಮರೆಯೆ ನಿನ್ನನವ ॥**

ಯಸ್ಯಾತ್ಮತಾಂ ತ್ರಿಪುರಭಂಗವಿಧಾವಧಾಸ್ತ್ವಂ
ತ್ವಚ್ಛಕ್ತಿತೇಜಿತಶರೋ ವಿಜಯೀ ಚ ಯೋಽಭೂತ್ ।
ದಕ್ಷಕ್ರತೌ ತು ಕಿಲ ತೇನ ವಿನಿರ್ಜಿತಸ್ತ್ವಂ
ಯುಕ್ತೋ ವಿಧೇಯವಿಷಯೇಷು ಹಿ ಕಾಮಚಾರಃ ॥ ॥ ೧೧ ॥

**ತ್ರಿಪುರನಾಶವಗೈವಕಾಲದಿ**
**ವಪುರಧಿಷ್ಠಿತನಾಗಿ ರುದ್ರನಿ**
**ಗಪರಿಮಿತಬಲವಿತ್ತು ಬಾಣದರೂಪವನುಹೊಂದಿ ।**
**ರಿಪುವ ಕೊಂದಿರೆ ನೀನೆ ಪಶುಪತಿ**
**ಕುಪಿತನಾಗಲು ದಕ್ಷಯಜ್ಞದಿ**
**ತಪಿಸಿ ಸೋತುದದೇಕೆ ಶ್ರಿತರೊಳು ಕೃತಿಯು ತನ್ನಿಷ್ಟ ॥**

ಮುಗ್ಧಶ್ರಿತುರ್ವಟದಳೇ ಶಯಿತೋsತಿತನ್ವಾ
ತನ್ವಾ ಜಗಂತಿ ಬಿಭೃಷೇ ಸವಿಕಾಸಮೇವ ।
ಐಶೀಮಿಮಾಂ ತು ತವ ಶಕ್ತಿಮತರ್ಕಿತವ್ಯಾ
ಮವ್ಯಾಜತಃ ಪ್ರಥಯಸೇ ಕಿಮಿಹಾವತೀರ್ಣಃ ॥ ॥ ೧೨ ॥

**ಪ್ರಳಯಕಾಲದ ಜಲಧಿಯೊಳು ನೀ**
**ನೆಳೆಯಮಗುವಿನ ರೂಪದಲಿ ವಟ**
**ದಳದಮಧ್ಯದಿ ಮಲಗಿ ನಿನ್ನಯ ಸೂಕ್ಷ್ಮಜಠರದಲಿ ।**
**ಅಳತೆಮೀರಿದ ಸಕಲಭುವನಗ**
**ಳಳವಡಿಸಿ ಧರಿಸಿರುವ ಶಕ್ತಿಯ**
**ನಿಳೆಗಿಳಿದು ತೋರಿಸಲು ಬಂದೆಯೆ ಸಹಜಕೃಪೆಯಿಂದ ॥**

ಬ್ರಹ್ಮೇಶಮಧ್ಯಗಣನಾ ಗಣನಾರ್ಕಪಂಕ್ತಾ
ಇಂದ್ರಾನುಜತ್ವಮದಿತೇಸ್ತನಯತ್ವಯೋಗಾತ್ ।
ಇಕ್ಷ್ವಾಕುವಂಶಯದುವಂಶಜನಿಶ್ಚ ಹಂತ
ಶ್ಲಾಘ್ಯಾನ್ಯಮೂನ್ಯನುಪಮಸ್ಯ ಪರಸ್ಯ ಧಾಮ್ನಃ ॥ ॥ ೧೩ ॥

**ದ್ರುಹಿಣಶಿವರೊಳು ಮಧ್ಯಗಣನೆಯು**
**ಅಹರಧೀಶರ ನಡುವೆ ಯೆಣಿಕೆಯು**
**ಸಹಭವತೆ ಶಕ್ರನಿಗೆಯದಿತಿಯ ಜಠರದಲಿ ಜನಿಸಿ ।**
**ಬಹುಮತದಿ ರಘುವಂಶಯದುಕುಲ**
**ವಿಹರಣವು ಪೊಗಳಿಕೆಗೆ ಕಾರಣ**
**ವಿಹತಕಲುಷನಿಗನುಪಮಗೆ ಪರಧಾಮನಿಗೆ ನಿನಗೆ ॥**

ತ್ವನ್ನಿರ್ಗತಾ ಜಠರಗಾ ಚ ತವ ತ್ರಿಲೋಕೀ
ಕಿಂಭಿಕ್ಷಣಾದಿಯಮೃತೇ ಭವತಾ ದುರಾಪಾ ।
ಮಧ್ಯೇ ತಥಾ ತು ನ ವಿಚಕ್ರಮಿಷೇ ಜಗಚ್ಚೇತ್
ತ್ವದ್ವಿಕ್ರಮೈಃ ಕಥಮಿವ ಶ್ರುತಿರಂಚಿತಾ ಸ್ಯಾತ್ ॥ ॥ ೧೪

**ಸೃಜಿಸಿ ಲೋಕಗಳನ್ನು ನೀನೇ**
**ಭುಜಿಸಿ ಜಠರದೊಳಿರಿಸಿಕೊಂಡಿರೆ**
**ನಿಜಯುವಿಭವಗಳನ್ನು ತೋರದೆ ನಡೆದು ಬಲಿಮುಖಕೆ ।**
**ಭಜಿಸಿ ಬಲಿಯನು ಬೇಡಿ ಮೂರಡಿ**
**ನಿಜಪದಾಬ್ಜದಿ ಧರೆಯನೊಡನೆಯೆ**
**ತ್ರಿಜಗವಳೆದೆಯೊ ವೇದವಾಕ್ಯವ ಸಫಲಗೊಳಿಸಲಿಕೆ ॥**

ಪೃಚ್ಛಾಮಿ ಕಿಂಚನ ಯದಾ ಕಿಲ ರಾಘವತ್ವೇ
ಮಾಯಾಮೃಗಸ್ಯ ವಶಗೋ ಮನುಜತ್ವಮೌಗ್ಧ್ಯಾತ್ ।
ಸೀತಾವಿಯೋಗವಿವಶೋ ನ ಚ ತದ್ಗತಿಜ್ಞಃ
ಪ್ರಾದಾಸ್ತದಾ ಪರಗತಿಂ ಹಿ ಕಥಂ ಖಗಾಯ ॥

ಅಕ್ಷುಣ್ಣಯೋಗಪಥಮಗ್ರ್ಯಹತಂ ಜಟಾಯುಂ
ತಿರ್ಯಂಚಮೇವ ಬತ ಮೋಕ್ಷಪಥೇ ನಿಯೋಕ್ತುಂ ।
ಶಕ್ನೋಷಿ ವೇತ್ಸಿ ಚ ಯಥಾ ನ ತಥಾ ಕಥಂ ತ್ವಂ
ದೇವೀಮವಾಪ್ತುಮನಲಂ ವ್ಯಥಿತೋ ವಿಚಿನ್ವನ್ ॥ ॥ ೧೫ ॥

**ಧ್ಯಾನಯೋಗದ ಪಥವನರಿಯದ**
**ಕಾನನದಿ ತಿರ್ಯಕ್ಸ್ವರೂಪದ**
**ಹೀನವಿಪ್ರಹತನಾಗಿರುವಾ ಜಟಾಯುವಿಗೆ ।**
**ನೀನೆ ಮೋಕ್ಷದ ದಾರಿ ತೋರಿರ**
**ಲೇನನರಿಯದ ಮರುಳನಂದದಿ**
**ಜಾನಕಿಯ ನೆಲೆಯರಿಯದಲೆದುದು ಬಹುವಿಚಿತ್ರವಲ ॥**

ಸಾಲಾನ್ ಹಿ ಸಪ್ತ ಸಗಿರೀನ್ ಸರಸಾತಲಾನ್ಸ್ತ್ವೈನ್
ಏಕೇಷುಮುಂದಜವತೋ ನಿರಪತ್ರಪಸ್ತ್ವಂ ।
ತ್ರೇಷ್ಮೈಕವಿನ್ಯಘನಬಿನ್ನಕಪಿಪ್ರಣುನ್ನಂ
ಶಾಖಾಮೃಗಂ ಮೃಗಯಸೇ ಸ್ಮ ಕಥಂ ಸಹಾಯಂ ॥ ॥ ೧೬ ॥

ಒಂದುಬಾಣದಿ ಸಪ್ತತರು ಗಿರಿ
ಯೊಂದುಗೂಡಿ ರಸಾತಲಂಗಳ
ನಂದು ಭೇದಿಸಿ ವಿಜಯಿಯೆನಿಸಿದ ರಘುಪತಿಯೆ ನೀನು ।
ಒಂದು ಮರವನೆ ಕೆಡಹಲಾರದೆ
ಕುಂದಿರುವ ಕಪಿಯಿಂದ ಹೆದರುತ
ಬಂದುಗನ ಹೊಂದಿರುವ ಕಪಿಯನು ಸಾಹ್ಯ ಕೆಳಸಿದೆಯ್ಯ ॥

ಮಾನುಷ್ಯಕಂ ಚರಿತಮಾಚರಿತುಂ ಪ್ರವೃತ್ತೋ
ದೇವಾತಿಗಂ ಚರಿತಮಂಗ ಕಿಮಂಗ್ಯಕಾರ್ಷೀಃ ।
ಯತ್ಸಾಗರೇ ಕಿಲ ಬಬಂಧಿಥ ನಾಥ ಸೇತುಂ
ಶೈಲೈಃ ಪ್ಲವಂಗಮಸಮೀಹಿತ ಸಂಪ್ರಣುನ್ನೈಃ ॥ ॥ ೧೭ ॥

ಮನುಕುಲವ ಬೆಳಗಿಸುವ ರಾಮನೆ
ಮನುಜಚರಿತೆಯನೆಸಗೆ ತೊಡಗುತ
ದನುಜನಮರರ ಚರಿತೆಮೀರಿದ ಕಾರ್ಯಗಳ ನೀನು ।
ಅನುಗೊಳಿಸಿ ಮಾಡಿದುದದೇತಕೆ
ಘನತರದ ಶೈಲಗಳ ತೇಲುತ
ವನಧಿಯೊಳು ಸೇತುವೆಯದಾದುದು ನಿನ್ನ ಮಹಿಮೆಯಲ ॥

ಯೋ ವಿಕ್ರಮೇಣ ಮನುಜತ್ವವಿಭೂಷಿತೇನ
ದೇವಂ ವರಂ ವರುಣರಾಜ ಮಜಯ್ಯಜೇತಾ ।
ಕೃತ್ವೋಪದಾಂ ದಶರಥಂ ವಿಧಿರುದ್ರಮುಖ್ಯೈಃ
ದೇವೈಸ್ತುತಶ್ಚ ಸ ಕಿಲೇಂದ್ರಜಿತಾ ಜಿತೋಽಸಿ । ॥ ೧೮ ॥

**ಅಸಮವಿಕ್ರಮಭೂಷಿತನೆ ನೀಂ**
**ವಶಗೊಳಿಸಿವರುಣನನು ಜಯಿಸಿದೆ**
**ದಶರಥನ ಮುಂದಿಟ್ಟು ಬಂದಿಹ ವಿಧಿಶಿವಾದಿಗಳ ।**
**ವಿಶದನುತಿಪರದೈವ ನೀನೆಂ**
**ದುಸಿರಲದ ಸಮ್ಮತಿಸಿ ಪಡೆದೆಯೊ**
**ಜಸವ ಮಿಗೆ ಸೋತೆಯಲ ಶಕ್ರಜಿದಸ್ತ್ರಬಲದಿಂದ ॥**

ಅಬ್ಧಿಂ ನ ತೇರಿಥ ನ ಜಿಗ್ಯಿಥ ರಾಕ್ಷಸೇಂದ್ರಂ
ನೈವಾಸ್ಯ ಜಿಗ್ಯಿಥ ಯದಾ ಚ ಬಲಾಬಲಂ ತ್ವಂ ।
ನಿಸ್ಸಂಶಯಸ್ಸಪದಿ ತಸ್ಯ ಪದೇಭ್ಯಷಿಂಚಃ
ತಸ್ಯಾನುಜಂ ಕಥಮಿದಂ ಹಿ ವಿಭೀಷಣಂ ಚ ॥ ॥ ೧೯ ॥

**ದಾಟಲಿಲ್ಲವು ಜಲಧಿಯನು ರಿಪು**
**ಕೋಟಿಗಳನೊಡೆದಿಲ್ಲ ರಾಕ್ಷಸ**
**ಕೋಟಿಗಳ ಕೊಂದಿಲ್ಲವಿಸ್ತು ಇದಕೆ ಮೊದಮೊದಲೇ ।**
**ಓಟದಲಿ ಬಂದಾ ವಿಭೀಷಣ**
**ನಾಟಗಳನರಿಯದೆಯೆ ಲಂಕೆಯ**
**ಪೀಠದಭಿಷೇಕವನುಗೈದುದು ಸರಿಯೆ ನೀನವಗೆ ॥**

ತ್ವಂ ದಕ್ಷಿಣಸ್ಯ ನಿವಸನ್ನುದಧೇಸ್ತಟೇಽಪಿ
ದೂರಾಂತರೋತ್ತರಪಯೋಧಿಮಹಾಂತರೇಽಪೇ ।
ಪ್ರತ್ಯಾನ್ನಿಜೈಕಶರಣಾರ್ಥಿ ಕಿಮೇಽತಾಂ
ಲಂಕಾಂ ಸ್ಥಿತೋಽತ್ರ ಕುರುಷೇ ಕಿಲ ನಸ್ಮ ಭಸ್ಮ ॥ ॥ ೨೦ ॥

ಇರಲು ದಕ್ಷಿಣಜಲಧಿಯೆಡೆ ನೀಂ
ವರುಣ ನಮಿಸಲು ಕಾಯಲವನನು
ಶರವ ಕೊಟ್ಟುದ ನೋಘಗೊಳಿಸದೆ ದಾನವರನೆಲೆಯು ।
ನಿರುತವುತ್ತರದಿಕ್ಕಿನಲ್ಲಿರೆ
ಸರಳನವಗೆ ಬಿಟ್ಟು ದಹಿಸಿದೆ
ಪರಿಸರದೊಳಿರುತಿರುವ ಲಂಕೆಯನೇಕೆಸುಡಲಿಲ್ಲ ॥

ಏತತ್ಕಥಂ ಕಥಯ ಯನ್ಮಥಿತಸ್ತ್ವಯಾಸೌ
ಹಿತ್ವಾ ಸ್ವಭಾವನಿಯಮಂ ಪ್ರಥಿತಂ ತ್ರಿಲೋಕ್ಯಾಂ ।
ಅಶ್ವಾಪ್ಸರೋವಿಷಸುಧಾವಿಧುಪಾರಿಜಾತ
ಲಕ್ಷ್ಮ್ಯಾತ್ಮನಾ ಪರಿಣತೋ ಜಲಧಿರ್ಬಭೂವ ॥ ॥ ೨೧ ॥

ಸಾಗರವ ನೀಂ ಮಥಿಸುತಿರಲದು
ವೇಗದಿಂ ಧೇನ್ವಶ್ವತರುವಿಷ
ನಾಗವಿಧುಲಕ್ಷ್ಮ್ಯಮೃತ ಮೊದಲಾಗಿರುವ ರೂಪದಲಿ ।
ನೀಗಿ ತನ್ನ ಗುಣಸ್ವರೂಪವ
ಹೀಗೆ ಪರಿಣಾಮವನು ಪಡೆಯಲು
ಭೋಗಿಶಯನನೆ ಕಾರಣವ ನೀನರುಹುವೆಯ ಯೆಮಗೆ ॥

ಯತ್ತ್ವದ್ವ್ರಣಾಗಸಮರಿಂ ರಘುವೀರ ವೀಕ್ಷ್ಯ
ವಿಶ್ರಾಂತವಾನಿತಿ ಮುಮೋಚಿಥ ಮುಗ್ಧರಾಜಾ ।
ಕೋಽಯಂ ಗುಣಃ ಕತರಕೋಟಿಗತಃ ಕಿಯಾನ್ ವಾ
ಕಸ್ಯ ಸ್ತುತೇಃ ಪದಮಹೋ ವದ ಕಸ್ಯ ಭೂಮಿಃ ॥ ॥ ೨೨ ॥

**ಜಾಯೆಯನು ಕದ್ದಿರುವ ಪಾತಕಿ**
**ಕಾಯದಲಿ ಶರಹತಿಗೆ ರಣದೊಳು**
**ನೋಯುತಿರೆ ತಕ್ಕೈಸಿ ಕರುಣೆಯತೋರಲವನೊಳಗೆ ।**
**ಗೇಯಸುಗುಣನೆ ನೀನು ರಿಪುವನು**
**ಸಾಯಿಸದೆ ವಿಶ್ರಾಂತಿಪಡೆದೊಡೆ**
**ಬಾಯೆನುತ ಕಳುಹಿದೆ ಇದೇತರಗುಣದ ಪರಿಣಾಮ ॥**

ಯಲ್ಲಕ್ಷ್ಮಣಸ್ತ್ವದನುಜೋ ರಿಪುಶಕ್ತಿಮುಗ್ಧಃ
ಶತ್ರೋರ್ಗುರುರ್ಹನುಮತಸ್ತು ಲಘುರ್ಬಭೂವ ।
ಏತೇನ ತೇ ಸುವಿದಿತೋಽಭವದಿಂದ್ರಶತ್ರೋಃ
ಮಾಯಾಸ್ತ್ರಬಂಧನನಿಬಂಧನಜೋ ವಿಮೋಹಃ ॥ ॥ ೨೩ ॥

**ರಾವಣನಶಕ್ತ್ಯಾಯುಧಾಹತಿ**
**ಜೀವಿತಕೆ ಸಂಶಯವ ಕಲ್ಪಿಸ**
**ಲಾವಿಧದಿ ಲಕ್ಷ್ಮಣನು ಮಲಗಿರೆ ದಶಮುಖನುಜವದಿ ।**
**ಧಾವಿಸೆತ್ತಲು ಕದಲದವನನು**
**ಹೂವಿನಂದದೊಳೊಯ್ದು ಮಾರುತಿ**
**ಈ ವಿಧದ ನೀವೇಕೆ ಶಕ್ರಜಿದಸ್ತ್ರಕಡಗಿದಿರಿ ॥**

ನಾ ಹಂತ ಹಂತ ಭವತಶ್ಚರಣಾರವಿಂದ
ದ್ವಂದ್ವಂ ಕದಾನುಭವಿತಾ ವಿಷಯೋ ಮಮಾಕ್ಷ್ಣೋಃ ।
ಯೋಽಹಂ ನಿರರ್ಗಳವಿನಿರ್ಗಳದಂಧಕಾರೈಃ
ವೃಕ್ಷೈಸ್ತೃಣೈಶ್ಚ ಸುಲಭಂ ಸಮಯಂ ವ್ಯತೀತಃ ॥
ಯೋ ಧರ್ಮಮಾಚರಿತುಮಭ್ಯಸಿತುಂ ಚ ಯೋಗಂ
ಜ್ಞೋದ್ಯಂ ಚ ಕಿಂಚನ ನ ಜಾತ್ವಧಿಕಾರಭಾಜಃ ।
ತೇಽಪಿ ತ್ವದಾಚರಿತಭೂತಲಗಂಧಬಂಧಾತ್
ಬಂಧಾತಿಗಾಃ ಪರಗತಿಂ ಗಮಿತಾಸ್ತೃಣಾದ್ಯಾಃ ॥ ॥ ೨೪ ॥

**ವ್ರತನಿಯಮತಪಯೋಗವರಿಯುವ**
**ಮತಿಯೆಯಿಲ್ಲದ ವೃಕ್ಷತೃಣಗಳ**
**ಜೊತೆಗೆ ಜೀವಿಗಳೆಲ್ಲ ನೀನಿರುತಿರುವಯೋಧ್ಯೆಯಲಿ ।**
**ಸತತವಾಸವಗೈದಕಾರಣ**
**ಖತಿರಹಿತವೈಕುಂಠಧಾಮವ**
**ಕುತುಕದಲಿ ಸೇರಿಸಿದೆ ಸನಗಾಸಮಲಂಗತಿಶಿತಲಾ ॥**

ತಾದೃಗ್ಗುಣೋ ನನು ಬಭೂವಿಥ ರಾಘವತ್ವೇ
ಯಸ್ತಾವಕಂ ಚರಿತಮನ್ವಹಮನ್ವಭುಂಕ್ತ ।
ಸೋ ತ್ವೈವ ಹಂತ ಹನುಮಾನ್ ಪರಮಾಂ ವಿಮುಕ್ತಿಂ
ಬುದ್ಧ್ವಾವಧೂಯ ಚರಿತಂ ತವ ಸೇವತೇಽಸೌ ॥ ॥ ೨೫ ॥

**ರಾಮರೂಪಿನ ನಿನ್ನಮಹಿಮೆಯ**
**ನಾಮಹಾಕಪಿಯಾಂಜನೇಯನು**
**ಪ್ರೇಮದಿಂದನುಭವಿಸಿ ಪರವಶಚಿತ್ತನಾಗಿರುತ ।**
**ಕ್ಷೇಮಕರ ವೈಕುಂಠಲೋಕದ**
**ಧಾಮವನು ಕಡೆಗಣಿಸಿ ನಿನ್ನಯ**
**ನಾಮಜಪಗುಣಗಾನಮಾಡುತ ಧರೆಯೊಳಿರುತಿಹನು ॥**

ಪತ್ನ್ಯೇವ ಗವ್ಯನಿವಹೇ ನಿಜಧಾಮ್ನಿ ಭೂಮ್ನಾ
ಪರ್ಯಾಪ್ತವತ್ಸ್ವಪಿ ಕಿಮರ್ಥಮಭೂಶ್ಚೋರಸ್ತ್ವಂ ।
ಮುಷ್ಣಂಸ್ತು ಕಿಂ ವ್ರಜಘಟೀಷು ಘಟೇಷು ಮಗ್ನೋ
ಗೋಪೀಜನಸ್ಯ ಪರಿಹಾಸಪದಂ ಕಿಮಾಸೀಃ ॥ ॥ ೩೦ ॥

**ತನ್ನ ಮನೆಯೊಳೆ ಪಾಲುಬೆಣ್ಣೆಯು**
**ತಿನ್ನಲಾರದ ತೆರದಿ ತುಂಬಿರ**
**ಲನ್ಯಗೋಪರ ಗೃಹಗಳೊಳು ನೀಂ ಕದ್ದುದೇತಕ್ಕೆ ।**
**ಸನ್ನುತನೆ ಗವ್ಯಗಳಕದ್ದರು**
**ಅನ್ಯರಿಗೆ ದೊರಕಿಸದೆ ಘಟಗಳ**
**ಭಿನ್ನಗೈದುದದೇಕೆ ಪೆಣ್ಗಳ ನಗೆಗೆ ಗುರಿಯಾಗಿ ॥**

ಯನ್ನಾಮ ನಾಥ ನವನೀತಮಚೂಚುರಸ್ತ್ವಂ
ತಚ್ಛಾದನಾಯ ಯದಿ ತೇ ಮತಿರಾವಿರಾಸೀತ್ ।
ಕಿಂ ಮುಗ್ಧದಿಗ್ಧಮಮುನಾ ಕರಪಲ್ಲವಂ ತೇ
ಗಾತ್ರೇ ಪ್ರಮೃಜ್ಯ ನಿರಗಾಃ ಕಿಲ ನಿರ್ವಿಶಂಕಃ ॥ ॥ ೩೧ ॥

**ನೀನು ಬೆಣ್ಣೆಯ ಕದ್ದುದಂತಿರ**
**ಲೇನಪೇಳಲಿ ಕಳ್ಳತನವನು**
**ಮಾನದಿಂದಲಿ ಮುಚ್ಚಿಕೊಳ್ಳಲು ಕೈಯ್ಯಬೆಣ್ಣೆಯನು ।**
**ದಾನವಾಂತಕ ನಿನ್ನ ಮೈಯ್ಯಿನ**
**ಜಾನು ಭುಜ ಮುಖಕೆಲ್ಲ ಲೇಪಿಸಿ**
**ಮೌನದಿಂ ಜನರೆಡೆಗೆ ಸಾರಿದೆ ಜಾಣ್ಮೆಯಿದು ಸರಿಯೆ ॥**

ಮಾತ್ರಾ ಯದಿ ತ್ವಮಸಿ ದಾಮನಿ ಸನ್ನಿಬದ್ಧಃ
ತಚ್ಛ್ರಾವಿಣಾಮುದಿತಬಾಷ್ಪನಿರ್ಝರಾಣಾಂ ।
ಬಧ್ನಾಸಿ ಹಂತ ಹೃದಯಂ ಭಗವನ್ ಕುತಸ್ತೇ
ಸರ್ವೋಽಹಿ ವಶ್ಯವಿಷಯೋ ವಿವೃಣೋತಿ ವೀರ್ಯಂ ॥ ॥ ೨೧ ॥

ಜನನಿ ಹಗ್ಗದಿ ನಿನ್ನ ಬಂಧಿಸೆ
ವಿನಯದಲಿ ನೀಂ ಬದ್ಧನಾದುದ
ಮುನಿವರರು ಯೋಗಿಗಳು ನೆನೆಯುತ ಬಾಷ್ಪಸುರಿಸುತಿರೆ ।
ಇನಿತು ಸೌಲಭ್ಯಾತಿಶಯದಿಂ
ಜನರ ಮನವನು ಬಂಧಿಸಿದೆ ನೀ
ನಸುಪಮನೆ ಸಹಜವಿದು ಪ್ರಿತರೊಳು ಬಲವತೋರುವುದು ॥

ಕಾಂತಾಲಕಾಂತಮಮಲಂ ಕಮಲಾಯತಾಕ್ಷಂ
ಮುಗ್ಧ ವಿಲಾಸಮುದಿತಸ್ಮಿತಮುನ್ನಸಂ ಚ ।
ವಕ್ತ್ರಂ ವಹನ್ ಪರಮ ಗೋಪಗೃಹೇಷು ಕಿಂ ತ್ವಂ
ಗೋಪೀಮನಾಂಸಿ ನಯಸೀತ್ಥಮುದಾಮಮೋಹೈಃ ॥ ॥ ೨೨ ॥

ಬೊಗಸೆಗಣ್ಣಿನ ಕುಟಿಲಮುಪ್ಪಿನ
ಚಿಗುರುತುಟಿಗಳ ನಲಿಮುಂಗುರಳಕನ
ನಗೆಮೊಗದ ಸೊಬಗಿನ ಮನೋಹರ ಸುಂದರಾಕೃತಿಯು ।
ಸೊಗಸನಾಂತಿರೆ ಗೋಪಗೃಹಗಳ
ಹೊಗುತ ಬೆಣ್ಣೆಯ ಜೋಕೆಗೆ ಚತುರನೆ
ಮೃಗವಿಲೋಚನೆಯರ ಮನಂಗಳ ನೀನು ಕದ್ದೆಯಲ ॥

ಸರ್ವಂ ಗುಣಾಯ ಗುಣಿನಾಮಿತಿ ಸತ್ಯಮೇತತ್
ಯತ್ತ್ವಿಹೇತರಜನೇ ಮಲಿನತ್ವಹೇತುಃ ।
ಯದ್ಗೋಪವೇಷವಿನಿವೇಷಣಮುತ್ತಮಂ ತೇ
ಗೋಪಾಲನಂ ಚ ಗಣಯಂತಿ ಗುಣಂ ಗುಣೇಷು ॥

ಯತ್ತ್ವತ್ಪ್ರಿಯಂ ತದಿಹ ಪುಣ್ಯಮಪುಣ್ಯಮನ್ಯತ್
ನಾನ್ಯತ್ತ್ರಯೋರ್ಭವತಿ ಲಕ್ಷಣಮತ್ರ ಜಾತು ।
ಧೂರ್ತಾಯಿತಂ ತವ ತು ಯತ್ಕಿಲ ರಾಸಗೋಷ್ಠ್ಯಾಂ
ತತ್ಕೀರ್ತನಂ ಪರಮಪಾವನಮಾಮನಂತಿ ॥ ॥ ೨೪ ॥

**ಸುಗುಣಿಯೆನ್ನುವ ಜಸವ ಪಡೆದವ**
**ಹಗುರತರ ಕಾರ್ಯಗಳ ಮಾಡಿಯು**
**ಜಗದಿ ವಿಖ್ಯಾತಿಯನು ಪಡೆವುದು ಸಹಜವಾಗಿಹುದು ।**
**ಖಗಚರನೆ ತವರಾಸಕೇಳಿಯು**
**ಮುಗುಡವಿಲ್ಲದೆ ದನವ ಕಾಯ್ದುದ**
**ಪೊಗಳುವದು ಮಿಗೆ ಪಾಲುಬೆಣ್ಣೆಗಳನ್ನು ಕದ್ದುದನು ॥**

ಗೋಪಾಲಪ್ರೋತಕತಯಾ ನಿಭೃತಂ ಧರಿತ್ರೀ
ಮಾವಸ್ತ್ರಕಾಮ ಇವ ಸನ್ನಪಿ ಬಾಲ್ಯಲೌಲ್ಯಾತ್ ।
ಐಂದ್ರಂ ನಿಹತ್ಯ ಮಖಮದ್ರಿಮಥೋ ದಧಾನಃ
ಕಿಂತಸ್ಥಿಷೇ ಸುರಗಣಾಯ ಸನಾಸನಾಯ ॥ ॥ ೨೫ ॥

**ಗೋಪ ಬಾಲಕ ರೂಪದೊಳು ನೀ**
**ನೀ ಪೃಥಿವಿಯೊಳು ನಿಭೃತವಾಸವ**
**ಶ್ರೀಪತಿಯೆ ಮಾಡುತಿರೆ ಶಕ್ರನ ಪೂಜೆಯನು ತಡೆದು ।**
**ಕೋಪಗೊಳಿಸುತ ಜಿಷ್ಣುವನು ಶಿಶು**
**ರೂಪದೊಳೆ ಗೋವರ್ಧನಾದ್ರಿಯ**
**ನಾಪರಿಯೊಳೆತ್ತುತ್ತ ಸುರರನು ಕೆಣಕಿದುದು ಸರಿಯೆ ॥**

ಧನ್ಯೈಃ ಶ್ರುತಂ ತದಿಹ ತಾವಕರಾಸಕಾಲೇ
ಗೀತೇನ ಯೇನ ಹಿ ಶಿಲಾಃ ಸಲಿಲಾಂಬಭೂವುಃ ।
ಪಂಚಾಪಿ ಕಿಂಚ ಪರಿವೃತ್ತಗುಣಾನಿ ಭೂತಾ
ನ್ಯಾವಿಷ್ಕೃತಾನುಮರುದಂಬರಶಂಬರಾಣಿ ॥
ಶ್ರೇಷ್ಠಃ ಕ್ಷಿತೌ ನ ಕಿಲ ಕಶ್ಚಿದಿಹಾಸ್ತಿ ಯೋ ವೈ
ರಾಸೋತ್ಸವೋತ್ಸುಕಧಿಯಸ್ತವ ಕಾನನಾಂತೇ ।
ವೇಣುಸ್ವನಸ್ರುತರಸೌಘಪರಿಪ್ಲುತಾಸ್ತೇ
ಸ್ವೇ ಸೃಕ್ವಿಣೀ ರಸನಯಾ ಲಿಲಿಹುರ್ಭುಜಂಗಾಃ ॥ ॥ ೨೬ ॥

**ಕೊಳಲನೂದಲು ನೀನು ವನದಲಿ**
**ನಳಿನನಾಭನೆ ಮಧುರಗಾನಕೆ**
**ಇಳೆಯೊಳಿಹ ಖಗಭುಜಗಮೃಗಗಳು ಮೇವ ಮರೆತವಲ ।**
**ಖಳರಿಗಾ ಸೌಭಾಗ್ಯ ದೊರೆವುದೆ**
**ಬಳಕೆಯಲ್ಲಿಹ ಸಹಜಗುಣಗಳ**
**ಕಳೆದುಕೊಂಡುವು ವಹ್ನಿಜಲಭೂವಾಯುಗಗನಗಳು ॥**

ಅಂಭೋದನೀಲಮರವಿಂದದಳಾಯತಾಕ್ಷಂ
ಪಿಂಛಾವತಂಸಮುರರೀಕೃತವೇಣುಪಾಣಿಂ ।
ತ್ವಾಂ ಗೋಪವೇಷಪರಿಕರ್ಮಿತಕಾಯಕಾಂತಿಂ
ಧನ್ಯಾಸ್ತದಾ ದದೃಶುರುನ್ಮಥಿತಾನ್ಯಭಾವಾಃ ॥ ॥ ೨೭ ॥

**ನೀಲಮೇಘಚ್ಛವಿಯ ಕಮಲ ವಿ**
**ಶಾಲನೇತ್ರನ ಪಿಂಛಮಾಳಿಯ**
**ಬಾಲಗೋಪಾಲಾತ್ಮರೂಪನ ವೇಣುಪಾಣಿಯನು ।**
**ಶೀಲವಂತರು ಭಕ್ತಿಯುತಗುಣ**
**ಶಾಲಿಗಳು ನಿನ್ನಾವತಾರದ**
**ಕಾಲದಲ್ಲಿದ್ದವರು ಕಂಡರನನ್ಯಭಾವದಲಿ ॥**

ಗೋವರ್ಧನೋ ಗಿರಿವರೋ ಯಮುನಾ ನದೀ ಸಾ
ವೃಂದಾವನಂ ಚ ಮಧುರಾ ಚ ಪುರೀ ಪುರಾಣೀ ।
ಅದ್ಯಾಪಿ ಹಂತ ಸುಲಭಾಃ ಕೃತಿನಾಂ ಜನಾನಾಂ
ಏತೇ ಭವಚ್ಚರಣಚಾರಜುಷಃ ಪ್ರದೇಶಾಃ ॥ ॥ ೨೮ ॥

**ಯಮುನೆ ಬೃಂದಾವನವು ಮಧುರೆಯು**
**ವಿಮಲಗೋವರ್ಧನ ಮಹಾದ್ರಿಯು**
**ಕಮಲನಾಭನೆ ನಿನ್ನ ಪಾದಸ್ಪರ್ಶಸುಕೃತವನು ।**
**ಅಮಮಗಳಿಸಿವೆಯಾಗಿ ಈಗಲು**
**ಪ್ರಮುಖತೆಯ ತೋರುತ್ತ ನೆಲಸಿವೆ**
**ನಮಗು ಸುಕೃತವ ಗೈಯ್ಯೆ ಸುಲಭಗಳೀ ಪ್ರದೇಶಗಳು ॥**

ಬೃಂದಾವನೇ ಸ್ಥಿರಚರಾತ್ಮಕಕೀಟದೂರ್ವಾ
ಪರ್ಯಂತಜಂತುನಿಚಯೋ ಬತ ಯೇ ತದಾನೀಂ ।
ನೈವಾಲಭಾಮಹಿ ಜನಿಂ ಹತಕಾಸ್ತ ಏತೇ
ಪಾಪಾಃ ಪದಂ ತವ ಕದಾ ಪುನರಾಶ್ರಯಾಮಃ ॥ ॥ ೨೯ ॥

**ವಾಸುದೇವನೆ ನೀನು ವಸಿಸಿದ**
**ಭಾಸುರಶ್ರೀಯುತ ಸುಕಾಂತಿಯ**
**ಸೂಸುವಾ ಬೃಂದಾವನಾಂತದಿ ಪಾಪಿಗಳು ನಾವು ।**
**ಆಸಮಯದೊಳು ನಿನ್ನ ನೋಡಲು**
**ಘಾಸತರು ಪಶುವಾಗಿ ಜನಿಸದೆ**
**ಮೋಸವಾಯಿತು ದೇವ ನಿನ್ನನು ಮತ್ತೆ ಕಾಣುವೆವೆ ॥**

ಆಚಿನ್ವತಃ ಕುಸುಮಮಂಘ್ರಿಸರೋರುಹಂ ತೇ
ಯೇ ಭೇಜಿರೇ ಬತ ವನಸ್ಪತಯೋ ಲತಾ ವಾ ।
ಅದ್ಯಾಪಿ ತತ್ಕುಲಭುವಃ ಕುಲದೈವತಂ ಮೇ
ಬೃಂದಾವನಂ ಮಮ ಧಿಯಂ ಚ ಸನಾಥಯಂತಿ ॥ ॥ ೪೦ ॥

**ಕುಸುಮಗಳ ನೀಂ ವನದಿ ಕೀಳಲು**
**ಬಿಸಜನೇತ್ರೆಯರೊಡನೆ ಚರಿಸುತ**
**ವಸುಧೆಯಲಿ ತೃಣಗುಲ್ಮಲತೆಗಳ ತುಳಿಯುತಿರಲಲ್ಲಿ ।**
**ಕಿಸಲಯಾಂಘ್ರಿಯ ಸಂಗಭಾಗ್ಯದಿ**
**ನಶಿಸದೀಗಲು ಬೆಳೆದುನಿಂತಿಹ**
**ಸಸಿಯ ಸಂತತಿಯೆನ್ನ ಮನವಾವನವ ಬೆಳಗುತಿದೆ ॥**

ಯಾ ಕಂಸಮುಷ್ಟಿಕಶಕಟನಿಬರ್ಹಣೋತ್ಥಾ
ಸಾ ನಿರ್ಜಿತತ್ರಿಜಗತಸ್ತವ ನೈವ ಕೀರ್ತಿಃ ।
ಗೋಪಾಲಸಾದಿ ಯದಿದಂ ಭವದೀಯ ಕರ್ಮ
ತ್ವಾರ್ದ್ರೀಕರೋತಿ ವಿದುಷಾಂ ಹೃದಯಂ ತದೇತತ್ ॥ ॥ ೪೧ ॥

**ಕಂಸಶಿಶುಪಾಲಾದಿ ಶೂರರ**
**ತಂಸರನು ಮಿಗೆ ಲೀಲೆಯಿಂದಲಿ**
**ಧ್ವಂಸಮಾಡಿದುದಚ್ಚರಿಯೆ ನೀಂ ಬಲಸಿಂಹಸನ್ನಿಭ ।**
**ಪಾಂಸುಪೂರಿತ ವ್ರಜದೊಳಾಡುತ**
**ಸಂತಸ್ಪಡುತ ದನಕರುಗಳ ಕಾಯ್ದುದು**
**ಶಂಸನೀಯೆನಿಪಕ್ಕೆ ಬುಧಜನಮನಸ್ಸು ಕರಗುವುದು ॥**

ಗೋಪಾಲವೇಷಪರಿಕರ್ಮಪರಾವರೇಶಂ
ಧ್ಯಾಯಾಮಿ ಧಾಮ ಪರಮಂ ತಮಸಃ ಪರಸ್ತಾತ್ ।
ತತ್ಪಿಂಛಲಾಂಛನಸುದಾಮಸುಕ್ತೋಪವೀತಂ
ಗೋಧೂಲಿಧೂಸರಿತಕುಂತಲಮಂತರಾಸ್ಯಾಂ ॥ ॥ ೪೨ ॥

ಜ್ಯೋತಿಗಳ ನಿಧಿ ತಮಸಿಗೆಟಕದ
ಪೂತ ತತ್ಪರಧಾಮವಾಸಿಯು
ಖ್ಯಾತಗೋಪಾಲಕಸುವೇಷನ ವರಪರಾವರನ ।
ಪ್ರೀತಿಯಿಂದಲಿ ದನವಕಾಯುವ
ನೂತನದ ಶಿಖಿಪಿಂಛ ಗೋಖುರ
ಜಾತ ಧೂಳಿನ ಶಿರದ ಮಂಗಳರೂಪನನು ನೆನೆವೆ ॥

ಯದ್ವಾ ಜರಾಸುತಭಯಾದ್ವಿಪಲಾಯಿತಾಸ್ತ್ವಂ
ತಚ್ಚೈನಮಸ್ಯಚರಿತಾನುವಿಧಾನಜಂ ತೇ ।
ತರ್ಹಿತ್ರಿಲೋಕಗುರುಮೀಶ್ವರಮೀಶ್ವರಾಣಾಂ
ಬಾಣಾಹವೇ ಕಿಮಿತಿ ಶಂಭುಮಜೃಂಭಯಸ್ತ್ವಂ ॥ ॥ ೪೩ ॥

ಬರೆ ಜರಾಸಂಧಾಖ್ಯವೈರಿಯು
ಕೆರಳಿಕೋಪದಿ ಯುದ್ಧಮಾಡಲು
ಪರಮಪುರಷನೆ ಹೆದರಿ ರಿಪುವಿಗೆ ಓಡಿಹೋದೆಯಲ ।
ಅರುಹಲೋಸುಗ ತನ್ನ ನರತೆಯ
ತೆರಳಿರುವ ನೀನೇಕೆಡೆದರದೆ
ಸುರನುತನ ಶಂಭುವನು ಜಯಿಸಿದೆ ಬಾಣಯುದ್ಧದಲಿ ॥

ಜಾತಂ ಕುತಸ್ತ್ವದಕೃತಜ್ಞವಿಚೇಷ್ಟಿತಂ ತೇ
ಪ್ರೀತ್ಯಾಯಯಾ ಕಿಲ ವರಂ ವವೃಷೇ ವೃಷಾಂಕಾತ್ ।
ಅಕ್ಷೇಷು ಸಕ್ತಮತಿನಾ ಚ ನಿರಾದರೇಣ
ವಾರಾಣಸೀ ಹರಪುರೀ ಭವತಾ ವಿದಗ್ಧಾ ॥ ॥ ೪೪ ॥

**ಶಿವನಬೇಡುತ ತಪವನೆಸಗುತ**
**ಲವನದಯೆಯಿಂ ಸುತರಪಡೆಯಲು**
**ತವಕಿಸುವ ನೀಂ ಬಹುಕೃತಘ್ನತೆಯನ್ನು ತೋರುತ್ತ ।**
**ಅವಿನಯದಿ ದುರ್ದಮನ ದರ್ಪದೊ**
**ಳವನ ವಾರಾಣಸಿಯ ಪುರವನು**
**ಜವದಿ ಕ್ರೀಡಾಸಕ್ತನಾಗಿಯೆ ದಹಿಸಿದುದು ಸರಿಯೆ ॥**

ಸಂಜೀವಯನ್ನಪಿ ಮೃತಂ ಸುತಮುತ್ತರಾಯಾ
ಸ್ಸಾಂದೀಪಿನೇಶ್ಚಿರಮೃತಂ ಸುತಮಾನಯಂಶ್ಚ ।
ಧಾಮ್ನೋನಿಜಾದ್ದ್ವಿಜಸುತಾನ್ ಪುನರಾನಯನ್ ವಾ
ಸ್ಸ್ವಾಮೇವತಾಂ ತನುಮಹೋ ಕಥಮಾನಯಂಸ್ತ್ವಂ ॥ ॥ ೪೫ ॥

**ಉತ್ತರೆಯ ಸಾಂದೀಪಿನೀರ್ವರ**
**ಸತ್ತಸುತರನು ಬದುಕಿಸುತ ನೀಂ**
**ಚಿತ್ರಚರಿತನೆ ವಿಪ್ರಪುತ್ರರ ಚಿರಮೃತರನವರ ।**
**ಸುತ್ತೆ ಜೀವಿತದೊಡನೆ ಕರೆತರ**
**ಲುತ್ತಮದ ಪರಧಾಮನೆಲೆಯಿಂ**
**ದೆತ್ತಿ ಮೊದಲಿನದೇಹದವರನೆ ಕೊಟ್ಟೆ ಚಿತ್ರವಿದು ॥**

ಅದ್ಯಾಪಿ ನಾಸ್ತ್ಯಪರತಿಸ್ತ್ರಿವಿಧಾಪಚಾರಾತ್
ಪಾಪಃ ಪರೋ ನಿಪತಿತೋಽಸ್ಮಿ ತಮಸ್ಯಪಾರೇ ।
ಏತಾದೃಶೋಽಹಮಗತಿರ್ಭವತೋ ದಯಾಯಾಃ
ಪಾತ್ರಂ ತ್ವದೀಯಚರಣೌ ಶರಣಂ ಪ್ರಪದ್ಯೇ ॥ । ೪೬ ।

ಈಗಲೂ ತ್ರಿವಿಧಾಪಚಾರದ
ವೇಗವಡಗಿಲ್ಲೆನಗೆ ಚಿಂತಿಸ
ಲಾಗದಂತಹ ಪಾಪಿ ಮುಳುಗಿಹೆ ನಾನು ತಮಸಿನಲಿ ।
ಹೀಗಿರುವ ಯೆನ್ನಲ್ಲಿ ಕರುಣಿಸಿ
ನಾಗಶಯನನೆ ಗತಿವಿಹೀನನ
ರಾಗದಿಂದಲಿ ಸಲಹು ನಿನ್ನಯ ಚರಣ ಶರಣೆನಗೆ

ವಿಸ್ರಂಭಣಂ ತ್ವಯಿ ನ ಯದ್ಯಪಿ ಮೇಽಸ್ತಿ
ನಾಪಿಶ್ರದ್ಧಾ ಯಥೋಕ್ತವಚನಾರ್ಥಗತಾ ತಥಾಪಿ ।
ವಾಚಂ ತ್ವಿಮಾಂ ಸಕೃದಥಾಪ್ಯಸಕೃನ್ಮಯೋಕ್ತಾಂ
ಸತ್ಯಾಂ ಕುರುಷ್ವ ದಯಯೈವ ದಯೈಕಸಿಂಧೋ ॥ ॥ ೪೭ ॥

ನಂಬಿಗೆಯು ಯೆನಗಿಲ್ಲ ನಿನ್ನೊಳು
ತುಂಬಿರುವುದಶ್ರದ್ಧೆ ಮನದೊಳ
ಗಂಬುಜಾಕ್ಷನೆ ಶರಣ ನೀನೆಂದೆಂಬ ನುಡಿಯೊಳಗೂ ।
ಸಂಭ್ರಮದೊಳೊಂದು ಸಲ ನುಡಿದರು
ಬೆಂಬಲವನಿದಕಿತ್ತು ಸತ್ಯವಿ
ದೆಂಬ ನಿಶ್ಚಯಗೊಳಿಸು ಕರುಣಿಸಿ ಪರಮಕರುಣಾಳೋ ॥

ಪಾಪೀಯಸೋऽಪಿ ಶರಣಾಗತಶಬ್ದಭಾಜಃ
ನೋಪೇಕ್ಷಣಂ ಮಮ ತವೋಚಿತಮೀಶ್ವರಸ್ಯ ।
ತ್ವಜ್ಜ್ಞಾನಶಕ್ತಿಕರುಣಾಸು ಸತೀಷು ನೇಹ
ಪಾಪಂ ಪರಾಕ್ರಮಿತುಮರ್ಹತಿ ಮಾಮಕೀನಂ ॥ ॥ ೪೮ ॥

ಪರಮಪಾಪವ ಮಾಡಿದರು ನಾಂ
ಹರಿಯೆ ನೀನೇ ಶರಣಯೆನಗೆಂ
ದರುಹಿಕೊಂಡಿರುವೆನ್ನುಪೇಕ್ಷೆಯು ನಿನಗೆ ತರವಲ್ಲ ।
ಅರಿವುಶಕ್ತಿದಯಾದಿ ಸುಗುಣಗ
ಳಿರುತಿರಲು ನಿನ್ನಲ್ಲಿ ಯನ್ನಯ
ದುರಿತವೇನನು ಮಾಡಬಲ್ಲುದು ಪೇಳು ಸರ್ವೇಶ ॥

ರಾಮಾನುಜಾಂಘ್ರಿ ಶರಣೋऽಸ್ಮಿ ಕುಲಪ್ರದೀಪಃ
ತ್ವಾಸೀತ್ಸಯಾಮುನಮುನೇಸ್ಸಚ ನಾಥವಂಶ್ಯಃ ।
ವಂಶ್ಯಃ ಪರಾಂಕುಶಮುನೇಸ್ಸಚ ಸೋऽಪಿ ದೇವ್ಯಾಃ
ದಾಸಸ್ತವೇತಿ ವರದಾಸ್ಮಿ ತವೇಕ್ಷಣೀಯಃ ॥ ॥ ೪೯ ॥

ವರದ ರಾಮಾನುಜಪದಾಂಬುಜ
ಶರಣ ನಾನವ ಯಾಮುನಾರ್ಯರ
ಚರಣಶರಣರು ಯಾಮುನರು ವರನಾಥವಂಶ್ಯರಲ ।
ವರಪರಾಂಕುಶಕುಲದಿ ನಾಥರು
ಮೆರೆಯೆ ಪೂಜ್ಯಪರಾಂಕುಶಾರ್ಯರು
ಸಿರಿಯ ದಾಸರು ಸಿರಿಯರಸ ನೀನೆನ್ನನೀಕ್ಷಿಪುದೈ ॥

ನಿರ್ಬಂಧ ಏಷ ಯದಿ ತೇ ಯದುಪಾಸಕಾನಾಂ
ಸಂಸೇವನೀಯೋ ವರದ ತ್ವಮಸಿ ನೇತರಾಂಸ್ತ್ವಂ ।
ತರ್ಹಿ ತ್ವಮೇವ ನನು ಶಕ್ತ್ಯಧಿಕಾರವಾಂಛಾಃ
ಪ್ರತ್ಯೂಹನಾಂಕ್ಷಿಪಿತರಜ್ಞ ನಿರ್ಧೇಹಿ ವಿಶ್ವಂ ॥ ॥ ೬೦ ॥

ಸಾನುರಾಗದಿ ಭಜಿಸುವವರನೆ
ನಾನು ಸಲಹುವೆನಿತರ ಜನರಿಗೆ
ಯೇನನೊಂದನು ಗೈಯ್ಯೆನೆಂಬುವುದಿಹುದೆ ನಿರ್ಬಂಧ ।
ಆ ನಿಯಮ ನಿನಗಿರುವುದಾದರೆ
ಹಾನಿಗೊಳಿಸುತ ವಿಘ್ನಚಯಗಳ
ನೀನೆ ಕರುಣಿಸು ಯೆನಗೆ ಶಕ್ತ್ಯಧಿಕಾರವಾಂಛೆಗಳ ॥

ವ್ಯಂಗ್ಯ ಸಂಸ್ಕೃತಕಾವ್ಯರೂಪದಿ
ತುಂಗತರಭಾವಾದಿ ಗುಣಗಳ
ಸಂಗತಿಯನಾಂತಿರಲು ತಾನತಿಮಾನುಷಸ್ತವವು ।
ಶಿಂಗರಾರ್ಯರ್ಜನ ಕೃತಿಗಿಳಿದು ಮಿಗೆ
ತಂಗಿಹುದು ಕನ್ನಡದ ನುಡಿಯಲಿ
ಮಂಗಳವು ಕಾವ್ಯಕ್ಕೆ ಪಠಿಸುವ ಸಕಲಸುಜನರಿಗೆ ॥

ಇಂತು ಕನ್ನಡ ಅತಿಮಾನುಷಸ್ತವವು
ಸಂಪೂರ್ಣವಾದುದು

ಶ್ರೀ ಕೃಷ್ಣಾರ್ಪಣಮಸ್ತು



## ಶೋಧನ ಪತ್ರಿಕಾ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
| --- | --- | --- | --- |
| | (ವಿಜ್ಞಾಪನೆಯಲ್ಲಿ) | | |
| 1 | 15 | ಸೋತ್ರ | ಸ್ತೋತ್ರ |
| 1 | 17 | ವಿಷದ | ವಿಶದ |
| 1 | 22 | ೂಲಭೂತ | ಮೂಲಭೂತ |
| 3 | (1ನೇ ಪದ್ಯ) | ಸುತರ | ಸುರರ |
| 4 | 8 | ಉತ್ಸವ | ಉತ್ಸುಕ |
| 5 | 11 | ವಿಮುಲ | ವಿಪುಲ |
| 5 | 17 | ಷಡುಣನು | ಷಡ್ಗುಣನು |
| 7 | 17 | ಅಡಿಯೊಳು | ಅಡಿಯೊಳು |
| 8 | 11 | ವಧಾಸ್ತ್ರಂ | ವಧಾಸ್ತ್ರವಂ |
| 10 | 8 | ಮೂರಡಿ | ಮೂರಡಿ |

ಶ್ರೀಃ

ಸಂಸ್ಕೃತ ಸಾಹಿತ್ಯ ಕ್ಷೇತ್ರದಲ್ಲಿ ಶ್ರೀವತ್ಸ ಚಿಹ್ನಮಿಶ್ರರಿಗೆ ಒಂದು ವಿಶಿಷ್ಟವಾದ ಸ್ಥಾನವಿದೆ. ಇವರು "ಪಂಚಸ್ತವ" ಎಂದು ಕರೆಯಲ್ಪಡುವ ಐದು ಸ್ತೋತ್ರಗಳನ್ನೂ ಮತ್ತು 'ಯಮಕರತ್ನಾಕರ' ಎಂಬ ಅಲಂಕಾರ ಗ್ರಂಥವನ್ನೂ ರಚಿಸಿದ್ದಾರೆ. ಸ್ತೋತ್ರ ಸಾಹಿತ್ಯದಲ್ಲಿ ಭಗವದ್ವಿಷಯಕವಾದ ರತಿಯೇ (ಭಕ್ತಿಯೇ) ಮುಖ್ಯವಾದುದು.

ಶ್ರೀವತ್ಸಚಿಹ್ನರ ಪಂಚಸ್ತವಗಳಲ್ಲಿ ವಿಶಿಷ್ಟಾದ್ವೈತ ದರ್ಶನ ಮತ್ತು ಭಕ್ತಿರಸ ಇವುಗಳ ಅಪೂರ್ವ ಸಾಮಂಜಸ್ಯವನ್ನು ನಾವು ಕಾಣುತ್ತೇವೆ. ಪ್ರಖರ ಮತಿಗಳೂ ಗ್ರಹಿಸಲಸಾಧ್ಯವಾದ ನೀರಸವಾದ ದಾರ್ಶನಿಕ ತತ್ತ್ವಗಳನ್ನು ರಸಭರಿತವಾದ ಕವಿತಾಪ್ರವಾಹವನ್ನಾಗಿ ಪರಿವರ್ತಿಸುವ ಸಾಮರ್ಥ್ಯ ಇವರ ಲೇಖನಿಯಲ್ಲಿದೆ ಇದರಿಂದ ಗಹನವಾದ ವೇದಾಂತತತ್ತ್ವಗಳನ್ನೂ ಸುಕುಮಾರ ಮತಿಯಾದ ಶ್ರೀ ಸಾಮಾನ್ಯನೂ ಸುಲಭವಾಗಿ ಗ್ರಹಿಸಬಹುದು.

ಶ್ರೀವತ್ಸಚಿಹ್ನಮಿಶ್ರರ ಅತಿಮಾನುಷಸ್ತವವು ಅತಿಮಾನುಷವಾದ ಕೃತಿಯೆಂಬುದರಲ್ಲಿ ಸಂದೇಹವೇ ಇಲ್ಲ. ಇವರು ಪರಮಾತ್ಮನಿಗೆ ಹಾಕಿರುವ ಪ್ರಶ್ನೆಗಳಿಗೆ ಪರಮಾತ್ಮನೇ ಮತ್ತೊಂದು ಅವತಾರ ಎತ್ತಿಬಂದರೂ ಉತ್ತರ ಹೇಳಲು ಸಾಧ್ಯವಿಲ್ಲವೆಂಬ ಅನುಭವವಾಗುತ್ತದೆ. ಇದರಲ್ಲಿ ವಿಭಿನ್ನವಾದ ಅವತಾರಗಳ ನಿಜಸ್ವರೂಪಾನುಭವವೇ ಉಂಟಾಗುತ್ತದೆ.

ಕನ್ನಡ ನಾಡಿನ ಶ್ರೀಸಾಮಾನ್ಯರಿಗೆ ಇಂತಹ ಅಪೂರ್ವಸ್ತೋತ್ರಕಾವ್ಯವನ್ನು ಅನುಭವಿಸುವ ಸೌಭಾಗ್ಯ ಇದುವರೆಗೆ ಒದಗಿರಲಿಲ್ಲ. ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಅಪ್ರತಿಮ ಪಾಂಡಿತ್ಯ ಪಡೆದು ಅನೇಕ ಕೃತಿಗಳನ್ನು ರಚಿಸಿರುವ ಶ್ರೀ ಜಗ್ಗು ಶಿಂಗರಯ್ಯಂಗಾರ್ಯರು ಈ ಕೊರತೆಯನ್ನು ಮನಗಂಡು ಮೂಲಭೂತವಾದ ಅಭಿಪ್ರಾಯಗಳಿಗೆ ಕಿಂಚಿತ್ತೂ ಕುಂದುತರದೆ ಮೃದುಮಧುರವಾದ ಪದಸಂಯೋಜನೆಯೊಡನೆ ಸಹಜವಾದ ರೀತಿಯಲ್ಲಿ ಕನ್ನಡ ಪದ್ಯಾನುವಾದವನ್ನು ತಮ್ಮ ವೃದ್ಧಾಪ್ಯದಲ್ಲಿ ರಚಿಸಿರುವುದು ಅತ್ಯಂತ ಪ್ರಶಂಸಾರ್ಹ. ನವ್ಯಕವಿತೆಗಳ ಈ ನವ್ಯಯುಗದಲ್ಲಿ ಛಂದಸ್ಸನ್ನೂ ಬಿಡದೆ ನವ್ಯತೆಗೂ ಕೊರತೆ ತರದೆ ಇಂತಹ ಶ್ರೇಷ್ಠವಾದ ಕೃತಿಯನ್ನು ರಚಿಸಿರುವುದಕ್ಕೆ ಕನ್ನಡ ರಸಿಕ ವೃಂದವು ಇವರಿಗೆ ಚಿರಋಣಿಯಾಗಿದೆ.

ವಿದ್ವಾನ್, ಮಂ. ಅ. ಲಕ್ಷ್ಮೀತಾತಾಚಾರ್ಯ ಎಂ. ಎ.